ದಾಸತ್ರಯರು ರಚಿಸಿದ

# ಮುನಿತ್ರಯ ಸುಳಾದಿ

ಶ್ರೀ ಶ್ರೀಪಾದರಾಯರ, ಶ್ರೀ ವ್ಯಾಸರಾಯರ
ಮತ್ತು ಶ್ರೀ ರಾಘವೇಂದ್ರಸ್ವಾಮಿಗಳ ಸುಳಾದಿಗಳು

ಸಂಗ್ರಹಕಾರ :

ಪಿ. ವಿಷ್ಣುತೀರ್ಥ, ನವವೃಂದಾವನ
ಆನೆಗೊಂದಿ 583 246

ಬೆಲೆ : ರೂ. 1

# ವಿಷಯಾನುಕ್ರಮಣಿಕೆ

ಶ್ರೀಃ

# ಮುನಿತ್ರಯ ಸುಳಾದಿ

## ಶ್ರೀ ಶ್ರೀಪಾದರಾಯರ, ಶ್ರೀ ವ್ಯಾಸರಾಯರ ಶ್ರೀ ರಾಘವೇಂದ್ರರ ಸುಳಾದಿಗಳು

ಸಂಗ್ರಹಕಾರ :

**ಪಿ. ವಿಷ್ಣುತೀರ್ಥ, ನವವೃಂದಾವನ, ಆನೆಗೊಂದಿ**

# ಮುನ್ನುಡಿ

ನಮಃ ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ
ನಮಃ ಶ್ರೀರಾಘವೇಂದ್ರಾಯ ಪ್ರಣತೋಸ್ಮಿ ಮುನಿತ್ರಯಮ್

ಶ್ರೀನರಸಿಂಹಸುಳಾದಿ, ದುರ್ಗಾಸುಳಾದಿ ಮತ್ತು ಧನ್ವಂತರಿ ಸುಳಾದಿಗಳನ್ನು ಮುದ್ರಣ ಮಾಡಿಸಿದಾಗಿನಿಂದಲೂ ನನಗೆ ಅದೇ ರೀತಿ ಶ್ರೀ ವ್ಯಾಸರಾಯರ ಮತ್ತು ಶ್ರೀಮಂತ್ರಾಲಯದ ರಾಯರ ಸುಳಾದಿಗಳನ್ನೂ ಸೇರಿಸಿ ಅಚ್ಚುಹಾಕಿಸಬೇಕೆಂಬ ಆಶೆಯಿತ್ತು.

ಈಚೆಗೆ ದಾಸಕೂಟಸಾಹಿತ್ಯಕ್ಕೆ ಅಗ್ರಗಣ್ಯರೂ ಸಂಸ್ಥಾಪಕರೂ ಆದ ಶ್ರೀ ಶ್ರೀಪಾದರಾಯರ ಸುಳಾದಿಯನ್ನೂ ಸೇರಿಸಬೇಕೆನ್ನಿ

ಸಿತು. ಹೀಗೆ 'ಮುನಿತ್ರಯ ಸುಳಾದಿ' ರೂಪಗೊಂಡಿತು.

ಸುಳಾದಿಯ ಪಾಠವನ್ನು ಬರೆಯುವಾಗ ಅನೇಕ ಪಾಠಾಂತರ ಗಳು ಕಂಡುಬಂದುವು. ಅವುಗಳನ್ನೆಲ್ಲಾ ಸೇರಿಸಿ ಮುದ್ರಿಸಬೇಕೆಂದೇ ನನ್ನ ಇಚ್ಛೆಯಿತ್ತು. ಆದರೆ ನನ್ನ ಕೆಲವು ಮಿತ್ರರು 'ಅದು ಜನ ಸಾಮಾನ್ಯರಿಗೆ ಹೆಚ್ಚು ಉಪಯೋಗವಾಗಲಾರದು, ಮುದ್ರಿಸು ವುದೂ ಬಹು ಕಠಿನ' ಎಂದು ಸಲಹೆ ಕೊಟ್ಟ ಕಾರಣ ಸದ್ಯಃ ಪಾಠಾಂತರಗಳನ್ನು ಕೊಡದೆ ಒಂದು ಸರಳ ಪಾಠವನ್ನು ಮಾತ್ರ ಕೊಟ್ಟಿದ್ದೇನೆ. ಆ ಗುರುಗಳೇ ಪ್ರೇರಿಸಿದಾಗ ಮತ್ತೊಮ್ಮೆ ಮುದ್ರಿಸುವಾಗ ಆ ಪಾಠಾಂತರವನ್ನು ಕೊಡಬೇಕೆಂದು ಆಲೋ ಚಿಸಿದ್ದೇನೆ.

ಈ ಪುಸ್ತಕವನ್ನು ಮುದ್ರಿಸಲು ನನಗೆ ಪ್ರೇರಣೆ ಮಾಡಿದವರು ಶ್ರೀ ಹುಲಿಕುಂಟೇಶ ಪ್ರಾಣದೇವರ ಭಕ್ತರಾದ, ಬೊಂಬಾಯಿ ಯಲ್ಲಿ ವಾಸವಾಗಿರುವ ಶ್ರೀ. ಬಿ. ಎನ್. ಕೇಶವಮೂರ್ತಿಗಳೆಂಬ ನನ್ನ ಮಿತ್ರರು. ಈ ಪ್ರೇರಣೆಗೆ ನಾನು ಅವರಿಗೆ ಕೃತಜ್ಞ.

ಮೊದಲನೆಯ ಮುದ್ರಣದ ಪ್ರತಿಗಳು ಮುಗಿದ ಕಾರಣ ಈಗ ಎರಡನೆಯ ಮುದ್ರಣ ಮಾಡಿಸುತ್ತಿದ್ದೇನೆ.

ರಕ್ತಾಕ್ಷಿ (೧೯೦೬)
ಅಕ್ಷಯ ತೃತೀಯ
ದಿನಾಂಕ 4-5-1984

**ವಿಷ್ಣು ತೀರ್ಥ**
ನವವೃಂದಾವನ
ಬೆಂಗಳೂರು ವಾಸ

ಶ್ರೀ ಮಧ್ವಾಂತರ್ಗತ ಶ್ರೀಲಕ್ಷ್ಮೀನರಸಿಂಹಾಯ ನಮಃ

# ಶ್ರೀ ವಿಜಯದಾಸರ

# ಶ್ರೀ ಶ್ರೀಪಾದರಾಯರ ಸುಳಾದಿ

ರಾಗ—ರೇಗುಪ್ತಿ ಧ್ರುವತಾಳ

**ಶ್ರೀಪಾದರಾಯ**ಗುರುವೇ ! ದೃಢಭಕುತಿಯಿಂದ ನಿಮ್ಮ
ಶ್ರೀಪಾದಪದುಮವ ನೆರೆನಂಬಿದವನ ಭಾಗ್ಯ
ಅಪಾರವಲ್ಲದೆ ಲೇಶ ಕೊರತೆಯಿಲ್ಲ.
ಗೋಪಾದ ಉದಕದೊಳು ರತುನ ದೊರಕಿದಂತೆ

ಪ್ರಾಪ್ತವಾಗೋದು ಬಹಿರಂತರ ಸೌಖ್ಯ.
ಲೋಪವಾಗದು ಒಂದು ಇಷ್ಟಾರ್ಥ ಪ್ರತಿದಿವಸ.
ಆಪರ್ಥ[1] ಎನಿಸದು ಪೇಳಿದ ವಚನಂಗಳು.
ಆಪವರ್ಗಕೆ[2] ಮಾರ್ಗ ಕೇವಲ ಖ್ಯಾತಿಯಾಗಿ
ತಾಪಸಿ[3]ಯಾಗುವನು ಜನುಮಜನುಮ ಬಿಡದೆ.
ಗೋಪಾಲಕೃಷ್ಣನ ಗುಣವ ಕೊಂಡಾಡುತ
ಆಪಾದ ಮೌಳಿಪರ್ಯಂತ ನೋಡುತ ಮಹಾ
ಪಾಪರಹಿತರಾಗಿ ಸಂಚರಿಸುವರು ನಿತ್ಯ.

---

[1] ಆಪರ್ಥ-ಅಪಾರ್ಥ, ಸುಳ್ಳು, ಸಟೆ [2] ಆಪವರ್ಗ-ಮೋಕ್ಷ, ಮುಕ್ತಿ
[3] ತಾಪಸಿ–ತಪಸ್ವಿ, ಋಷಿ; ಯೋಗಿ

ಪ್ರಾಪ್ತವಾಗುವದು ವಂದಿಸಿದವರಿಗೆ
ಭೂಪರ[4] ಬೇಡಿದ ಮನೋರಥಂಗಳು.
ಶ್ರೀಪಾದರಾಯ[5] ಶಿರಿನಾರಾಯಣ ಯೋಗಿ[6]
ಈ ಪರಿ ಸ್ಮರಿಸಿದ ಜನರ ಸಂಗದಲ್ಲಿದ್ದ
ಆ ಪುಣ್ಯಪುರುಷರಿಗೆ ಕೈವಲ್ಯ[7] ಇದ್ದಲ್ಲಿಗೆ
ಪೋಪದಲ್ಲದೆ ಅವನ ಆಯುಷ್ಯ ವ್ಯರ್ಥವಾಗಿ

---

[4]ಭೂಪರ–ರಾಜರನ್ನು (ಎಂದರೆ ಶ್ರೀಪಾದರಾಜರನ್ನು) [5]ಇದು ಇವರ ರೂಢನಾಮ [6]ಇದೇ ಇವರ ಆಶ್ರಮನಾಮ. ವ್ಯಾಸರಾಯರು "ಲಕ್ಷ್ಮೀನಾರಾಯಣಮುನೀನ್ ವಂದೇ ವಿದ್ಯಾಗುರೂನ್ ಮಮ" ಎಂದು ವಂದಿಸಿದ್ದಾರೆ [7]ಮುಕ್ತಿ

ಪ್ರೋಪವಲ್ಲದೆ ಕೇಳಿ
ಭಾಪುರೆ ಇವರ ಬಿರುದು ಪೊತ್ತು ತಿರುಗಿದವ
ಶಾಪಾದಪಿ ಶರಾದಪಿ ಎನಿಸಿಕೊಂಬ.
ದೀಪದ ಬೆಳಕಿನಲ್ಲಿ ಸರ್ವವು ಕಂಡಂತೆ
ವ್ಯಾಪ್ರುತದರ್ಶಿಯಾಗಿ ಯೋಗಿಯಂತೆ ಕಾಂಬ.
ದ್ವಿಪಾದಪಶು[8] ಕಾಣೋ ಈ ಮುನಿಯ ನಂಬದವ.
ಕೂಪಾರ[9] ಎಂಬೋ ಮಹಾಘೋರದೊಳಗಿಪ್ಪ[10]

[8] ಎರಡು ಕಾಲಿನ ಮೃಗ [9] ಕೂಪಾರ-ಸಾಗರ (ಇಲ್ಲಿ ಸಂಸಾರಸಾಗರ)
[10] ಇವರನ್ನು ನಂಬ ನು ಸಂಸಾರಸಾಗರದಲ್ಲಿ ಬಿದು ತೊಳಲಾಡು ವನು ಎಂದು ಭಾವ

ಆಪತ್ಕಾಲಮಿತ್ರ ವಿಜಯವಿಠಲರೇಯನ
ವ್ಯಾಪಾರವನು ಮನದಿ ನೆನೆನೆನೆದು ನಲಿದಾಡು ೧

ಮಟ್ಟತಾಳ

ಭಕುತಿ ಬೇಕಾದವರು ಇವರ ಪಾದದಲ್ಲಿ
ಸಕಲ ಕಾಲಕ್ಕೆ ಇದೇ ಸಾಧ್ಯ ನಮಗೆಂದು
ಸಕುತ[11]ರಾಗಲಿಬೇಕು ರಾಗಂಗಳ ತೊರೆದು,
ಮುಕುತಿಮಾರ್ಗಕ್ಕೆ ಇನ್ನು ಯಾತಕೆ ಅನುಮಾನ
ಕಕ್ಕುಲಾತಿಯಿಂದ ಕಂಡಕಂಡಲ್ಲಿ ತಿರುಗಿ

---

11 ಆಸಕ್ತ

ಹಕ್ಕಲ ಮನಸಿನಲ್ಲಿ[11] ಕೆಟ್ಟುಪೋಗಾದಿರಿ,
ಲಕ್ಕುಮಿರಮಣ ನಮ್ಮ ವಿಜಯವಿಠಲರೇಯನ
ಭಕುತರೊಳಗೆ ಮಹಾಮಹಿಮನೆನಿಸಿಕೊಂಬಾ 2

ತ್ರಿಪುಟತಾಳ

ನಂಬಿರೋ ಶ್ರೀಪಾದರಾಯರ ಚರಣವ
ಹಂಬಲಿಸದಿರಿ ಅನ್ಯಮಾರ್ಗ
ತುಂಬಿತುಳುಕುತಿಪ್ಪುದು ಇಹಪರದ ಭಾಗ್ಯ.
ಉಂಬೋದು ಉಡುವೋದು ಅಡಿಗಡಿಗೆ

---

12 ಕ್ಷುದ್ರವಾದ ಅನ್ಯಥಾ ಬುದ್ಧಿ (ಗೋ. ಹನುಮಂತರಾಯರು)

ಡಿಂಬಾ[13]ದೊಳಗೆ ಹರಿಧ್ಯಾನಂಗತನಾಗಿ
ಕಾಂಬುವ ಲೇಶ ಬಿಡದೆ ಪಾದಗಳಿಗೆ
ಗಂಭೀರ ಸಂಸಾರವಾದರು ಆದೇ ಅವಗೆ
ಇಂಬುಕೊಡುವುದು[14] ವೈದಿಕವೆನಿಸಿ
ಅಂಬುಜಸಖತೇಜ[15] ವಿಜಯವಿಠಲರೇಯನ
ಬೆಂಬಿಡದೆ ಭಜಿಸಬೇಕು ದಿನಪ್ರತಿದಿನದಿ ೩

---

13 ದೇಹ 14 ಆಶ್ರಯ ಕೊಡುವುದು 15 ಅಂಬುಜಸಖ-ಕಮಲದ ಮಿತ್ರನಾದ ಸೂರ್ಯನಂತೆ, ತೇಜ-ಪ್ರಕಾಶವುಳ್ಳ

ಅಟ್ಟತಾಳ

ಇವರ ಪ್ರಸಾದವಾದರೆ ವ್ಯಾಸಮುನಿರಾಯ,
ಕವಿರಾಯ ಪುರಂದರದಾಸರು ಮಿಗಿಲಾ-
ದವರ ಕರುಣವಿನ್ನು ಸಿದ್ಧಿಸುವುದು ಕೇಳಿ.
ನವಭಕುತಿ[16] ಪುಟ್ಟುವುದು ವ್ಯಕ್ತವಾಗಿ
ತವಕದಿಂದಲಿ[17] ಚರಮದೇಹವೇ[18] ಬರುವದು
ದಿವಿಜರು[19] ಒಲಿದು ಸತ್ಕರ್ಮ ಮಾಡಿಸುವರು

---

16 ಶ್ರವಣ, ವಂದನ ಮೊದಲಾದ ಒಂಭತ್ತು ವಿಧವಾದ ಭಕ್ತಿ
17 ಶೀಘ್ರವಾಗಿ 18 ಸಾಧನವೆಲ್ಲ ಮುಗಿದ ಕಡೆಯ ದೇಹ
19 ತತ್ವಾಭಿಮಾನಿ ದೇವತೆಗಳು

ಸುವಿರುದ್ಧವಾದ ಜನರೊದ್ದು[20] ಸುಖವನು-
ಭವಿಸಿ ಕೊಂಡಾಡುವರು ನಿತ್ಯ
ಶ್ರವಣಕ್ಕೆ[21] ತೋರುವ ವಿಜಯವಿಠಲರೇಯನ
ದಿವಾರಾತ್ರಿಯಲ್ಲಿ ನೋಡಿ ಸುಜನರ ಕೂಡುವಾ ॥

ಆದಿತಾಳ

ನರಕ-ನರಕಾದಲ್ಲಿ ಹೊರಳುವ ಮನುಜ
ಧರೆಯೊಳು ಇವರ ಚರಿತೆ ಒಂದೊಂದು ಅದ್ಭುತವಾಗಿ
ನಿರುತದಲ್ಲಿ ನೋಡೆ ತುಂಬಿ ಸೂಸುತಲಿದೆ

---

20 ದುಷ್ಟಪ್ರೇರಕರಾದ ದೈತ್ಯರನ್ನು ನಿಗ್ರಹಿಸಿ 21 ಶ್ರವಣಮನನಾದಿಗಳಿಗೆ

ಅರುಣೋದಯದಲೆದ್ದು ಶ್ರೀಪಾದರಾಯರೆಂದು
ಸ್ಮರಿಸಿದ ಮಾನವರಿಗೆ ಸರ್ವಸಂಪದವು
ಪರಿಹಾಸವಲ್ಲ ಕೇಳಿ ಅನುಭವ ತಿಳಿದವಗೆ
ಸುರಭೂಸುರ[22] ಪ್ರಿಯ **ವಿಜಯವಿಠಲನ**
ಕರುಣದಿಂದಲಿ ಮಹಾ ಉನ್ನತದಲಿಪ್ಪರು ೫

---

22 ಬ್ರಾಹ್ಮಣ

16

ದೃಢಭಕುತಿಯಿಂದ ಇದನೆ ಓದಿದ ಮನುಜರಿಗೆ
ಜಡರೋಗ ಪರಿಹಾರ **ವಿಜಯವಿಠಲ** ಒಲಿವಾ

**ಅಥವಾ ಪಾಠಾಂತರ**

ಧ್ರುವಮತಿಯಿಂದ ಭಜಿಸಿದ ಮನುಜರಿಗೆ
ಭವರೋಗ ಪರಿಹಾರ **ವಿಜಯವಿಠಲ**ನೊಲಿವಾ



ಶ್ರೀರುಕ್ಮಿಣೀಸತ್ಯಭಾಮಾಸಮೇತ ಶ್ರೀವೇಣುಗೋಪಾಲಕೃಷ್ಣಾಯ ನಮಃ

## ಶ್ರೀ ಪುರಂದರದಾಸರ

# ಶ್ರೀ ವ್ಯಾಸರಾಯರ ಸುಳಾದಿ

### ಧ್ರುವತಾಳ

ವ್ಯಾಸರಾಯರ ಚರಣಕಮಲ ದರುಶನವೆನಗೆ
ಏಸುಜನ್ಮದ ಸುಕೃತ ಫಲ ದೊರಕಿತೋ ! ಎನ್ನ
ಸಾಸಿರ ಕುಲಕೋಟಿ ಪಾವನ್ನವಾಯಿತು.
ಶ್ರೀಶನ್ನ ಭಜಿಸುವುದಕ್ಕಧಿಕಾರಿ ನಾನಾದೆ

ದೋಷರಹಿತನಾದ ಪುರಂದರವಿಠಲನ
ದಾಸರ ಕರುಣವೆನ್ನ ಮೇಲೆ ಇರಲಾಗಿ ೧

ಮಠ್ಯತಾಳ

ಗುರು ಉಪದೇಶವಿಲ್ಲದ ಜ್ಞಾನವು
ಗುರು ಉಪದೇಶವಿಲ್ಲದ ಯೋಗ
ಗುರು ಉಪದೇಶವಿಲ್ಲದ ಕ್ರಿಯೆಗಳು
ಗುರು ಉಪದೇಶವಿಲ್ಲದ ಸ್ನಾನವು
ಗುರು ಉಪದೇಶವಿಲ್ಲದ ಧ್ಯಾನವು
ಗುರು ಉಪದೇಶವಿಲ್ಲದ ಜಪವು
ಗುರು ಉಪದೇಶವಿಲ್ಲದ ತಪವು

20

ಗುರು ಉಪದೇಶವಿಲ್ಲದ ಮಂತ್ರ
ಗುರು ಉಪದೇಶವಿಲ್ಲದ ತಂತ್ರ
ಉರಗನ ಉಪವಾಸದಂತೆ ಕಾಣಿರೋ
ಗುರು ವ್ಯಾಸರಾಯರೇ ಕರುಣದಿಂದೆನಗೆ
ವರ ಮಹಾಮಂತ್ರಗಳ ಉಪದೇಶಿಸಿದರು
ಪುರಂದರವಿಠಲನೆ ಪರನೆಂದರುಹಿ
ದುರಿತಭಯವನೆಲ್ಲ ಪರಿಹರಿಸಿದರಾಗಿ ೨

ರೂಪಕತಾಳ

ಅಂಕಿತವಿಲ್ಲದ ದೇಹ ನಿಷಿದ್ಧ
ಅಂಕಿತವಿಲ್ಲದ ಕಾವ್ಯ ಶೋಭಿಸದು

ಅಂಕಿತವಿಲ್ಲದಿರಬಾರದುಯೆಂದು ಚ-
ಕ್ರಾಂಕಿತವನ್ನು ಮಾಡಿ[1] ಎನ್ನಂಗಕ್ಕೆ
ಪಂಕಜನಾಭ ಶ್ರೀಪುರಂದರವಿಠಲನ
ಅಂಕಿತ ಎನಗಿತ್ತ ಗುರು ವ್ಯಾಸಮುನಿರಾಯ ೩

ಝಂಪೆತಾಳ

ನ್ಯಾಯಾಮೃತ ತರ್ಕತಾಂಡವ ಚಂದ್ರಿಕೆ ಮೊದಲಾದ
ನ್ಯಾಯಗ್ರಂಥಗಳ ರಚಿಸಿ ತನ್ನ ಶಿಷ್ಯರಿಗಿತ್ತ.
ಮಾಯಾವಾದಿ ಮೊದಲಾದ ಇಪ್ಪತ್ತೊಂದು

---

1 ತಪ್ತಮುದ್ರಧಾರಣೆ ಮಾಡಿ

ಬಾಯ ಮುದ್ರಿಸಿದೆಯೋ ಮಧ್ವರಾಯರ ಕರುಣದಿಂದ
ಶ್ರೀಯರಸ ಪುರಂದರವಿಠಲನ ಭಕ್ತರೊಳು
ನಾಯಕನೆನಿಸಿಕೊಂಡೆ ಗುರು ವ್ಯಾಸಮುನಿರಾಯ ೪

### ತ್ರಿವಿಡಿತಾಳ

[1]ಶೇಷಾವೇಶ ಪ್ರಹ್ಲಾದನವತಾರವೆನಿಸಿದೆ
ವ್ಯಾಸರಾಯನೆಂಬ ಪೆಸರು ನಿಮಗಂತೆ

---

[1] ಇದನ್ನು ಶ್ರೀಪಾದರಾಯರೇ ಕಂಡಿದ್ದರೆಂದು ಒಂದು ಐತಿಹ್ಯವಿದೆ

ದೇಶಾಧಿಪನಿಗೆ* ಬಂದ ಕುಹುಯೋಗವ ನೋಕಿಸಿ
ನೀ ಸಿಂಹಾಸನವನೇರಿ ಮೆರೆದೆ ಜಗವರಿಯೆ.
ವ್ಯಾಸಾಬ್ಧಿಯನ್ನು ಕಟ್ಟಿಸಿದೆ, ದೇಶದ ಒಳಗೆಲ್ಲ
ಭಾಸುರಕೀರ್ತಿಯ ಪಡೆದೆ ನೀನು ಗುರುರಾಯ,

---

* ವಿಜಯನಗರದ ಚಕ್ರವರ್ತಿ ಕೃಷ್ಣದೇವರಾಯನಿಗೆ ಕ್ರಿ.ಶ. 1523 ನವೆಂಬರ್ 7 ನೇ ದಿನಾಂಕ ಹಾವು ಕಚ್ಚಿ ಸಾಯುವ (ಕುಹು)ಯೋಗ ಬಂದಿತ್ತು. ಅದನ್ನು ವ್ಯಾಸರಾಯರು ಆ ಸಮಯದಲ್ಲಿ ಸಿಂಹಾಸನದ ಮೇಲೆ ಕುಳಿತು ಪರಿಹಾರ ಮಾಡಿದರು.

* ಆಂಧ್ರಪ್ರದೇಶದ ಮದನಪಲ್ಲಿ ತಾಲೂಕಿನ ಕುಂದಕೂರಿನಲ್ಲಿರುವ 'ವ್ಯಾಸಸಮುದ್ರ'ವೆಂಬ ಭಾರಿ ಕೆರೆಯನ್ನು

ವಾಸುದೇವ ಪುರಂದರವಿಠಲನ್ನ ದಾಸರೊಳು
ಲೇಶ ನಿನ್ನಂತೆ ವೆಗ್ಗಳರನು[5] ಕಾಣೆನು ನಾನು ೫

ಧ್ರುವತಾಳ

ಸಿರಿನಾರಾಯಣಯೋಗಿಯಾದ ಶ್ರೀಪಾದರಾಯರಲ್ಲಿ
ವರವಿದ್ಯಾಭ್ಯಾಸವ ಮಾಡಿ ನೀನು
ಧರೆಯೊಳು ವಿಜಯೀಂದ್ರ ವಾದಿರಾಜರೆಂಬ
ಪರಮ ಶಿಷ್ಯರ ಪಡೆದು ಮೆರೆದೆ ಕೀರುತಿಯಲ್ಲಿ.
ಸುರೇಂದ್ರರು ಪುತ್ರಭಿಕ್ಷವ ಬೇಡೆ ವಿಜಯೀಂದ್ರರ

---

[5] ಶ್ರೇಷ್ಠರನ್ನು

ಕರುಣಿಸಿದೆ ಮಠವನುದ್ಧರಿಸುವ ಕಾರಣ,*
ಗುರು ವ್ಯಾಸರಾಯರೇ ಪರಮ ಗುರುಗಳೊಳು
ಪುರಂದರವಿಠಲನೆ ಪರದೈವ ಕಾಣಿರೋ ೬

ಆದಿತಾಳ

ಮಾನಸಪೂಜೆಯನ್ನು ನೀ ಮಾಡೆ
ದಾನವಾಂತಕ ರಂಗನು ಮೆಚ್ಚಿ
ತಾನೆ ಬಂದು ಗೋಪಾಲಕೃಷ್ಣನು
ಧ್ಯಾನದಿ ಕಾಣುತಲಿಪ್ಪನೋ

---

* ಹೆಚ್ಚಿನ ವಿವರಗಳಿಗೆ ವ್ಯಾಸರಾಯರ ಚರಿತ್ರೆ ಓದಬೇಕು

ಏನೆಂತು ಪೇಳಲಿ ನಿಮ್ಮ ಮಹಿಮೆಯ
ಜ್ಞಾನಿಗಳರಸ ವ್ಯಾಸಮುನಿರಾಯ !
ಹೀನಜನರು ನಿನ್ನ ಮಾನವನೆಂದು
ನಾನಾ ನರಕಕ್ಕುರುಳುವರು
ಶ್ರೀನಿವಾಸ ಪುರಂದರವಿಠಲ ನಿನ್ನ ಮುಂದೆ
ಗಾನವ ಮಾಡುತ ಆಡುತಲಿಪ್ಪನೋ ೭

ಅಟ್ಟತಾಳ

ಈಸು ಮುನಿಗಳಿದ್ದೇನು ಮಾಡಿದರು ?
ವ್ಯಾಸಮುನಿ ಮಧ್ವಮತವನುದ್ಧರಿಸಿದ.

ಕಾಶಿ ಗದಾಧರಮಿಶ್ರನ್ನ ಸೋಲಿಸಿದ,
ದಾಸನ್ನ ಮಾಡಿಕೊಂಡ ಧಾರುಣಿಯೊಳಗೆ
ಕಾಶಿ ಮಿಶ್ರ ಪಕ್ಷಧರ ವಾಜಪೇಯ ನಾ-
ರಸಿಂಹ ಯೋಗಿ ಲಿಂಗಣ್ಣ ಮೊದಲಾದ ವಿ-
ದ್ವಾಂಸರ ನೂರೆಂಟು ಮಂದಿಯ
ಜೈಸಿ ಜಯಪತ್ರಿಕೆಯನ್ನು
ವಾಸುದೇವ ಗೋಪಾಲಕೃಷ್ಣಗೆ
ಭೂಷಣವ ಮಾಡಿ ಹಾಕಿಸಿದ
ಶ್ರೀಶ ಪುರಂದರವಿಠಲ ಬ್ರಹ್ಮ
ಈಶ ಇಂದ್ರಾದಿಗಳಿಗೆಲ್ಲ

ಈಶನೆಂದು ಡಂಗುರವ ಪೊ-
ಯಿಸಿ ಮೆರೆದ ಜಗವರಿಯೆ
ದಾಸರೊಳು ನೀ ಸಮರ್ಥನು ಸನ್ಯಾಸಿಶಿರೋಮಣಿ ೮

ತ್ರಿವಿಡಿತಾಳ

ವರ ಮಧ್ವಮತವೆಂಬೊ ಸಾಗರದೊಳು ಅವ-
ತರಿಸಿದೆ ಪೂರ್ಣಚಂದ್ರಮನಂತೆ ನೀನು
ಕರುಣಾಕರ ಬ್ರಹ್ಮಣ್ಯತೀರ್ಥರ ಕುವರನೆನಿಸಿಕೊಂಡು
ಪುರಂದರವಿಠಲನ್ನ ಪರನೆಂದು ಅರುಹೆ
ದುರಿತಗಳೆಲ್ಲ ಪರಿಹರಿಸಿಕೊಂಡೆ ನಾನು ೯

ಜತೆ

ಗುರು ವ್ಯಾಸರಾಯರ ಚರಣವೆನಗೆ ಗತಿ
ಪುರಂದರವಿಠಲನ ಅರಿತೆ ಇವರಿಂದ

ಪಾಠಾಂತರ (ಗೋರಬಾಳ ಹನುಮಂತರಾಯರ
ಪುಸ್ತಕಗಳ ಪಾಠಗಳು)

ಗುರು ವ್ಯಾಸರಾಯರ ಕರುಣಾಕಟಾಕ್ಷದಿ
ಪುರಂದರವಿಠಲನ್ನ ಚರಣವ ಕಂಡೆ ನಾ

(ಅಥವಾ) ದಾಸನೆನಿಸಿಕೊಂಡೆ



ಪೂಜ್ಯಾಯ ರಾಘವೇಂದ್ರಾಯ ಸತ್ಯಧರ್ಮರತಾಯ ಚ ।
ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ ॥

ಶ್ರೀಮನ್ಮೂಲರಾಮೋ ವಿಜಯತೇ

## ಶ್ರೀ ಗೋಪಾಲದಾಸರ

# ಶ್ರೀ ರಾಘವೇಂದ್ರ ಸುಳಾದಿ

ರಾಗ-ಶಂಕರಾಭರಣ ಧ್ರುವತಾಳ

ಧರೆಯೊಳಗೆ ನಮ್ಮ । ಗುರು ರಾಘವೇಂದ್ರರಿನ್ನು
ಇರುತಿಪ್ಪ ವಿವರವ । ಅರಿತಷ್ಟು ವರ್ಣಿಸುವೆ.
ಸ್ಥಿರವಾಗಿ ಮಂತ್ರಾಲಯ । ಪುರ ತುಂಗಾತೀರದಿ
ಹರಿಭಕ್ತ ಪ್ರಹ್ಲಾದ । ವರ ಯಾಗ ಇಲ್ಲೇ ಮಾಡಿ

ಸುರರಿಗಮೃತ ಉಣಿಸಿ | ಪರಿಪರಿ ಕ್ರಿಯಾ ಮಾಡಿ
ಪರಿಶುದ್ಧನಾದನೆಂದು । ಅರಿತು ಈ ಸ್ಥಳದಲ್ಲಿ
ಗುರು ರಾಘವೇಂದ್ರರಾಯ । ಶರೀರ ಪೋಗಾಡಿಸಿಲ್ಲಿ
ಪರಲೋಕಸಾಧನ । ಪರಿಪೂರ್ತಿಮಾಡಿಕೊಂಡು
ಸಿರಿಕೃಷ್ಣನ ಚರಣ । ಕ್ಕೆರಗಿ ಸಂತೋಷದಲ್ಲಿ
ಧರೆಯ ಮೇಲಿದ್ದ ಜನರ । ಪೊರೆಯ ಬೇಕೆಂದೆನಲು
ಹರಿ ನೋಡಿದನಿವರ । ಪರಮದಯಾಳುತನವ
ಗುರುವಂತರ್ಯಾಮಿಯಾಗಿ । ವರವ ನೀಡಲು ಜನಕೆ
ನರಹರಿ ತಾನೆ ನಿಂದು | ನಿರುತ ಪೂಜೆಯುಗೊಂಬ
ಸಿರಿಯುಳ್ಳ ಕೀರುತಿಯು | ಸುರರ ಪಾಲಕ ಚಕ್ರ-

ಧರ ನಾರಾಯಣ ತಾನು । ವರ ಸನ್ನಿಧಾನವಾಗಿ-
ವರಿಗೆ ಫಲವನೀವ । ಇಹಪರದಲಿ ಇನ್ನು
ಕರುಣಾಕರ ರಂಗ । **ಗೋಪಾಲವಿಠಲ** ತನ್ನ
ಶರಣರ ಪೊರೆವಂಥ । ಚರಿಯ ಪರಿಪರಿ ಉಂಟು ೧

ಮಟ್ಟತಾಳ

ನರಹರಿ ರಾಮಕೃಷ್ಣ । ಸಿರಿ ವೇದವ್ಯಾಸ
ಎರಡೆರಡಿವರಲ್ಲಿ । ಹರಿ ಮೂರುತಿಗಳು[1]

---

[1] ನರಸಿಂಹ, ರಾಮ, ಕೃಷ್ಣ, ವೇದವ್ಯಾಸ ರೂಪಗಳ ಜೊತೆ ನಾಲ್ಕು ಪಕ್ಕಗಳಲ್ಲಿ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ಮೂರ್ತಿಗಳೂ ಇರುತ್ತಾರೆ.

ಪರಿವಾರ ಸಹಿತಾಗಿ । ಸಿರಿಸಹಿತ ನಿಂದು[2]
ಸುರರ ಗುರು ಮಧ್ವಾ-। ಚಾರ್ಯರು ಮೊದಲಾಗಿ
ತರುವಾಯದಲಿನ್ನು । ತಾರತಮ್ಯಾನುಸಾರ
ಪರಿಪರಿ ಯತಿಗಳು । ಇರುತಿಪ್ಪರು ಇಲ್ಲಿ.[3]
ಹರುಷದಿಂದಲಿ ವೇದ-। ವೊರೆದು ಶಾಸ್ತ್ರಗಳನ್ನು

---

[2]ನರಸಿಂಹನ ಜೊತೆ ಲಕ್ಷ್ಮಿಯೂ, ರಾಮನ ಜೊತೆ ಸೀತೆ, ಕೃಷ್ಣನೊಂದಿಗೆ ರುಕ್ಮಿಣೀ-ಸತ್ಯಭಾಮೆಯರೂ, ಅನಿರುದ್ಧಾದಿಗಳೊಡನೆ ಶಾಂತಿ, ಕೃತಿ, ಜಯಾ ಮಾಯೆಯರೂ ಇರುತ್ತಾರೆ. [3] ಪದ್ಮನಾಭತೀರ್ಥರು, ಟೀಕಾರಾಯರೇ ಮೊದಲಾದ ಸಕಲ ಮಾಧ್ವ ಯತಿಗಳೂ ಇಲ್ಲಿ ಸನ್ನಿಹಿತರಾಗಿರುತ್ತಾರೆ.

ಪರಿಪರಿ ಪುರಾಣ | ಭಾರತ-ಗಾನದಲಿ
ಸರಿಸರಿ ಬಂದಂತೆ । ಸರಿಗಮವೆನುತಲಿ
ಭರದಿಂದಲಿ ಕುಣಿದು । ಭಕುತಿಯಿಂದಲಿ ಇನ್ನು
ಹರಿಯನ್ನು ಪೂಜಿಸುತ । ಇರುಳು ಹಗಲು ಬಿಡದೆ
ಪರತತ್ವದ ವಿವರವ । ಪರಿಪರಿ ಕೇಳ್ವರು
ಗರುಡವಾಹನ ರಂಗ | **ಗೋಪಾಲವಿಠ್ಠಲ** ತನ್ನ
ಶರಣರ ಪಾಲಿಸುತ | ಇರುತಿಪ್ಪನಿಲ್ಲಿ ೨

**ತ್ರಿಪುಟತಾಳ**

ನರಹರಿರೂಪನಾಗಿ ವಾಸವಾಗಿ ಇಲ್ಲಿ
ದುರಿತದುಷ್ಕೃತ ಬ್ರಹ್ಮಹತ್ಯೆಗಳೋಡಿಸುವ.

ಸಿರಿರಾಮನಾಗಿ ವಾಸವಾಗಿ ಇಲ್ಲಿ
ಪರಿಪರಿಯಿಂದ ದೇಶಾಂತರ ಅನ್ನ ಕಳಕೊಂಡು
ನರರಿಲ್ಲಿ ಬಂದರೆ ಸ್ಥಿರಪಟ್ಟ ಕಟ್ಟುವ.
ಸಿರಿಕೃಷ್ಣನಾಗಿ ವಾಸವಾಗಿ ಇಲ್ಲಿ
ಪರಿಪರಿಯಿಂದಲಿ ಬಂದ ಪರಮಾತುರರಿಗೆ
ವರವೀವ ಪುತ್ರೋತ್ಸವ ಮದುವೆ ಮುಂಜಿ
ಹರಕೆಗಳ ಕೈಕೊಂಡು ಹರುಷಬಡಿಸುವನವರ.
ವರವೇದವ್ಯಾಸನಾಗಿ ವಾಸವಾಗಿ ಇಲ್ಲಿ
ಗರುವದಿಂದ ಬಂದ ದುರ್ವಾದಿಗಳನೆಲ್ಲ
ದೂರ ಓಡಿಸಿ ಮುರಿದಂ ಅವರ ಕುಶಾಸ್ತ್ರವ

ಹರಿ ಸರ್ವೋತ್ತಮನೆಂಬ ಇರವನಿಲ್ಲಿ ತೋರಿ
ಶರಣುಜನಕೆ ಇನ್ನು ವರ ಜ್ಞಾನಸುಧೆಯ
ಕರೆದುಕೊಡುತ ಇರುತಿಪ್ಪನು ಸರ್ವದಾ.
ಸಿರಿವಂತನಾದ **ಗೋಪಾಲವಿಠ್ಠಲ**
ಪರಿಪರಿಯಿಂದ ವಾಲಗ[*] ಕೈಕೊಳುತಿಪ್ಪ 2

ಅಟ್ಟತಾಳ

ರಾಘವೇಂದ್ರನೆಂಬ ರೂಪವೆ ತಾನಾಗಿ
ರಾಘವೇಂದ್ರನೆಂಬ ನಾಮವಿರಿಸಿಕೊಂಡು

---

[*] ಸೇವೆ (ಅಥವಾ ವೈಭವ)ಗಳನ್ನು

ರಾಘವೇಂದ್ರರಿನ್ನು ಮಾಡಿದಂಥಾ ಪುಣ್ಯ
ಭೋಗವರಿತು ತನ್ನ ಭಾಗವತರ ಕೀರ್ತಿ
ಸಾಗಿಸಿ ಸಲಹುತ ಜಗದೊಳಗೆಲ್ಲ
ಮೇಘ ಸುರಿದಂತವೋಘ ಕೀರುತಿಯನ್ನು
ರಾಘವ ಇವರಿಗೆ ರಾಜ್ಯವ ತಂದೀವ ಇಹಪರದಲಿನ್ನು
ರಾಘವೇಂದ್ರಮೂರ್ತಿ[5] ಗೋಪಾಲವಿಠ್ಠಲ ತನ್ನ
ಭಾಗವತರಲ್ಲಿ ಬಹು ಪೂಜೆಯನು ಕೈಕೊಂಬ ೪

---

[5] ಶ್ರೀರಾಮಚಂದ್ರ ಸ್ವಾಮಿಯು

**ಆದಿತಾಳ**

ದಿನದಿನಕಿಲ್ಲಿ ನೂತನ ಪೂಜೆಗಳಾಗುವುವು
ದಿನದಿನಕಿಲ್ಲಿ ನೂತನೋತ್ಸವಗಳಾಗುವುವು
ದಿನದಿನಕಿಲ್ಲಿ ನೂತನ ಕೀರ್ತಿಗಳಾಗುವುವು
ದಿನದಿನಕಿಲ್ಲಿ ನೂತನ ವಾರ್ತೆಗಳಾಗುವುವು
ಜನರ ಸಂದಣಿ ವಿಪ್ರಭೋಜನಂಗಳು
ಜನರ ಕೈಯಿಂದ ಪ್ರತಿಜನರೀಪ್ಸಿತ ತುಂಬುವರು
ಜನುಮ ಸಫಲ ಮಾಡಿ ಜನನವ ನೀಗುವರು
ದಿನ ಸಪ್ತಶತ ವರುಷ ದಿನ ಪರಿಯಂತರ[6]

---

[6] ಏಳುನೂರು ವರ್ಷಗಳವರೆಗೆ

ದಿನಕರಶತತೇಜ ಜನನಾಥ[8] ತಾನಿಲ್ಲಿ
ಅನುವಾಗಿ ತಾ ನಿಂದು ಜನರ ಪಾಲಿಪುದ
ಕ್ಕನುಮಾನ ಸಲ್ಲದು ಸಲ್ಲದು ಸಲ್ಲದು
ಗುಣಗಣಪರಿಪೂರ್ಣ **ಗೋಪಾಲವಿಠ್ಠಲ**
ಅಣೋರಣಿ ಎಂಬುವಗೆ ಎಣೆ ಯಾರೊ ಜಗದೊಳಗೆ ೫

---

[7] ದಿನಕರ–ಸೂರ್ಯರು, ಶತ–ನೂರರಂತೆ, ತೇಜ-ಪ್ರಕಾಶವುಳ (ನೂರಾರು ಸೂರ್ಯರ ಪ್ರಕಾಶವುಳ್ಳ) [8] ಭಗವಂತ, ಶ್ರೀಹರಿ

ಮಂತ್ರಸಿದ್ಧಿಕ್ಷೇತ್ರ ಇದು ನೋಡಿಕೋ ಇಲ್ಲಿ
ಮಂತ್ರಪ್ರತಿಪಾದ್ಯ **ಗೋಪಾಲವಿಠ್ಠಲನಿಂದ**

ಪಾಠಾಂತರ

ಮಂತ್ರಸಿದ್ಧಿಯ ಕ್ಷೇತ್ರ ಇದ ನೋಡಿ ಕೋವಿದರು
ಮಂತ್ರಪ್ರತಿಪಾದ್ಯ **ಗೋಪಾಲವಿಠ್ಠಲನಿಂದ**

ಶ್ರೀಕೃಷ್ಣಾರ್ಪಣಮಸ್ತು

## ಈ ಲೇಖಕರ ಇತರ ಕೃತಿಗಳು

1. ಪಂಪಾಮಾಹಾತ್ಮ್ಯ (ಪ್ರತಿಗಳು ಮುಗಿದಿವೆ)
2. ಶ್ರೀ ನರಸಿಂಹ ಸುಳಾದಿ, ದುರ್ಗಾಸುಳಾದಿ, ಧನ್ವಂತರಿ ಸುಳಾದಿ
3. ಶ್ರೀ ಮುಖ್ಯಪ್ರಾಣಾಭಿಷೇಕವಿಧಿ ಮತ್ತು ಪಂಚಮುಖಿ ಹನುಮತ್ಕವಚಾದಿ ಸ್ತೋತ್ರಗಳು
4. ಹಂಪೆ, ವಿಜಯನಗರ ಮತ್ತು ಕಿಷ್ಕಿಂಧಾಗಳ ಮಾರ್ಗದರ್ಶಿ
5. ಯಂತ್ರೋದ್ಧಾರಕರು ಮತ್ತು ನವವೃಂದಾವನ

**ಚಿತ್ರಪಟಗಳು** (1) ಯಂತ್ರೋದ್ಧಾರಕರು, (2) ನವ ವೃಂದಾವನ (3) ಶ್ರೀ ವ್ಯಾಸರಾಯರ ವೃಂದಾವನ.

ಬೆಂಗಳೂರಿನಲ್ಲಿ 'ವಾಸುದೇವ ಪದಸಂತತ ಸಂಗೀ' ಪಾಕ್ಷಿಕ ಪತ್ರಿಕೆ ಯಲ್ಲಿ ಧಾರಾವಾಹಿಯಾಗಿ ಪ್ರಕಟವಾಗುತ್ತಿರುವ ಗ್ರಂಥಗಳು :

1. ನಖಸ್ತುತಿ ಮತ್ತು ಶ್ರೀ ಹರಿವಾಯುಸ್ತುತಿ ಪ್ರತಿ ಪದಾರ್ಥತಾತ್ಪರ್ಯ ಮತ್ತು ವಿಶೇಷ ವಿವರಣೆಗಳೊಡನೆ

2. ಪುರುಷಸೂಕ್ತ, ಶ್ರೀ ರಾಘವೇಂದ್ರ ಸ್ವಾಮಿಗಳ ಮತ್ತು ಸತ್ಯ ಸಂಧರ ಸಂಸ್ಕೃತ ವ್ಯಾಖ್ಯಾನಗಳು, ಅವುಗಳ ಅರ್ಥಗಳು ಮತ್ತು ಮಹಾಮಹೋಪಾಧ್ಯಾಯ ಶ್ರೀ ಮುಷ್ಣ ಸೇತು ಮಾಧ ವಾಚಾರ್ಯರ ಕನ್ನಡ ಅರ್ಥ, ವಿವರಣೆ ಸಹಿತ

ಹೆಚ್ಚಿನ ವಿಚಾರಗಳಿಗೆ ಬರೆಯಿರಿ :

**ಆನಂದ ಪ್ರಿಂಟರ್ಸ್, 25, ಗಾಂಧಿಬಜಾರ್, ಬೆಂಗಳೂರು–4**

**ಪಿ. ವಿಷ್ಣುತೀರ್ಥ**

**931, 2ನೇ ಮುಖ್ಯ ಬೀದಿ, 4ನೇ ಬ್ಲಾಕ್**

**ರಾಜಾಜಿನಗರ, ಬೆಂಗಳೂರು-560 010**

ಇವರ ಎಲ್ಲಾ ಚಿತ್ರಪಟಗಳಿಗೂ, ಪುಸ್ತಕಗಳಿಗೂ
ಮುಖ್ಯ ಹಂಚಿಕೆದಾರರು :

**ಪಿ. ಎಲ್. ನಾರಾಯಣಶೆಟ್ಟಿ**

ಬಾಲಾಜಿ ಕಾಫೀ ವರ್ಕ್ಸ್

4/288 ಕೆ. ಆರ್. ರೋಡ್, ಹೊಸಪೇಟೆ 583 202

ಪುಸ್ತಕ ದೊರೆಯುವ ಸ್ಥಳ:

ಪಿ. ಎಲ್. ನಾರಾಯಣಶೆಟ್ಟಿ
4/288, ಕೆ. ಆರ್. ರೋಡ್, ಹೊಸಪೇಟೆ 583 202

ವೇದಾಂತ ಬುಕ್ ಹೌಸ್, 6 ನೇ ರಸ್ತೆ, ಚಾಮರಾಜಪೇಟೆ
ಬೆಂಗಳೂರು 560 018 (ಫೋನ್ ನಂ. 607590)

ಆನಂದ್ ಪ್ರಿಂಟರ್ಸ್
25, ಗಾಂಧಿ ಬಜಾರ್, ಬಸವನಗುಡಿ, ಬೆಂಗಳೂರು 560 004